ತುಂಕೂರು ಸುನಂದಾ*

# ತುಮಕೂರು ಜಿಲ್ಲೆಯ ಜಿನ ದೇವಾಲಯಗಳು

---

'ಸುಜನ ಜನಪದ'ವೆಂದು ಖ್ಯಾತಿವೆತ್ತಿರುವ ತುಮಕೂರು ಜಿಲ್ಲೆಯು ಇತಿಹಾಸದಲ್ಲಿ ನೊಳಂಬರು, ಗಂಗರು, ಹೊಯ್ಸಳರು, ವಿಜಯನಗರದ ಅರಸರು, ಚೋಳರು, ಮೈಸೂರು ಒಡೆಯರು ಮುಂತಾದವರ ಆಡಳಿತ ಮಂಡಲವಾಗಿದ್ದು ಆಯಾಯ ಕಾಲಕ್ಕೆ ಶೈವ-ವೈಷ್ಣವ ಧರ್ಮಕ್ಕೆ ಮಾನ್ಯತೆ ನೀಡಿರುವುದರೊಂದಿಗೆ ಜೈನಧರ್ಮಕ್ಕೂ ಅಷ್ಟೇ ಮಾನ್ಯತೆ ನೀಡಲಾಗಿತ್ತೆಂಬುದಕ್ಕೆ ಈ ಜಿಲ್ಲೆಯಲ್ಲಿ ಅಲ್ಲಲ್ಲೇ ಕಾಣಬರುವ ಜಿನ ದೇವಾಲಯಗಳು ಸಾಕ್ಷಿಯಾಗಿವೆ. ಚೋಳ ಮತ್ತು ಹೊಯ್ಸಳರ ಕಾಲಕ್ಕೆ ಇಲ್ಲಿ ಹೆಚ್ಚು ಜಿನ ದೇವಾಲಯಗಳು ನಿರ್ಮಿತವಾಗಿವೆ ಎನ್ನಬಹುದು. ಈ ಜಿನ ಮಂದಿರಗಳಲ್ಲಿ ನಿಟ್ಟೂರು ಮಂದಿರ ಹೊಯ್ಸಳ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿತು.

**ನಿಟ್ಟೂರು :**

ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೧೨ ಗುಬ್ಬಿ ೧೧ ಕ್ರಿ. ಶ. ೧೨೨೬ರ ಶಾಸನದ ಪ್ರಕಾರ ಈ ಊರನ್ನು ದಕ್ಷಿಣದ ಆಯ್ಯಾವೊಳೆ ಎಂದು ಕರೆಯಲಾಗಿದೆ. ಇಲ್ಲಿ ಚಿಕ್ಕದಾದ ಗರ್ಭಗುಡಿಯಲ್ಲಿ ಶಾಂತೀಶ್ವರಜಿನಮೂರ್ತಿ ಬಿಂಬವಿದೆ. ಮುಖಮಂಟಪ, ನವರಂಗ, ಸುಖನಾಸಿ, ಗರ್ಭಗೃಹಗಳಿದ್ದು ಕಲಾತ್ಮಕವಾಗಿದೆ. ಮುಖಮಂಟಪದ ಕಂಬಗಳು ದುಂಡಾಗಿವೆ. ಪಕ್ಕದಲ್ಲಿ ಪದ್ಮಾವತಿ ಗುಡಿ ಮತ್ತು ಅಭಯಪ್ರಧಾಯಕಳಾದ ಜ್ವಾಲಾಮಾಲಿನಿ ಮೂರ್ತಿಗಳಿವೆ. ಕಂಬ-ತೊಲೆಗಳಲ್ಲಿ ಎಂಟು, ಹದಿನಾರು-ಮೂವತ್ತೆರಡು ಕೋನಗಳ ನಕ್ಷತ್ರಗಳು, ಕಮಲದ ದಳಗಳು, ಗೋಡೆ ಮೇಲಿನ ಪಟಿಕೆಗಳು, ಹೂ-ಬಳ್ಳಿಗಳು, ವಾದ್ಯಗಾರರ, ತೀರ್ಥಂಕರರ, ಯಕ್ಷ-ಯಕ್ಷಿಯ ಶಿಲ್ಪಗಳನ್ನು ಶಿಲ್ಪಿಯು ಸುಂದರವಾಗಿ ಕಂಡರಿಸಿದ್ದಾನೆ. ಗುಬ್ಬಿ ಶಾಸನ ರೀತ್ಯಾ "ಈ ರೇಖೆಯ ಪ್ರತಿಮೆಯ ಕಂಡರಿಸಿದ ಮಳವೆಯ ಮಲಯ" (ಮಳೋಜಿ ಮಲ್ಲಯ್ಯ) ಎಂದು ತಿಳಿದು ಬರುತ್ತದೆ. ನವರಂಗದಿಂದ ಮುಂದಕ್ಕೆ ಪದ್ಮಾವತಿ ದೇವಿಯ ಗುಡಿ ಇದೆ. ಕಮಲಾಕಾರ ಪೀಠಸ್ಥಿತಳಾಗಿರುವಳು. ಈ ಅಂಕಣದಲ್ಲಿ ದುಂಡುಕಂಬಗಳು ಶಿಲ್ಪಗಳ ಕೆತ್ತನೆಯಿಂದ ಅಲಂಕೃತವಾಗಿವೆ. ನವರಂಗದಲ್ಲಿ ಒಂದು ನಿಶದಿ ಶಾಸನವಿದ್ದು, ಅದರಲ್ಲಿ ಇಬ್ಬರು ಸ್ತ್ರೀಯರು ಪದ್ಮಾಸನದಲ್ಲಿ ಕುಳಿತಿರುವ ಚಿತ್ರವಿದೆ. ನಿಟ್ಟೂರಿನ ಬಸದಿಯಲ್ಲಿನ ಶಾಸನದರೀತ್ಯಾ ಈ ಬಸದಿಯು ಮೂಲಸಂಘದ ಬಸದಿಯಾಗಿದ್ದು ೧೨೧೯ರಲ್ಲಿ ಮಲಧಾರಿ ದೇವರಗುಡ್ಡಿ ಮಾಳವಸೆಟ್ಟಿಕಬ್ಬೆಯರ ಮಗ ಮಲ್ಲಸೆಟ್ಟಿ ಈ ಚೈತ್ಯಾಲಯದ ಹೊರಬಿತ್ತಿಯ ಸುತ್ತಣ ಪ್ರತಿಮೆಯನ್ನು ಮಾಡಿಸಿದಂತೆ ಹೇಳಿದೆ.

**ಮಂದರಗಿರಿ (ಬಸದಿಬೆಟ್ಟ) :**

ತುಮಕೂರು ನಗರಕ್ಕೆ ಎಂಟು ಕಿ.ಮೀ. ದೂರವಿರುವ (ಬೆಂಗಳೂರು ರಸ್ತೆಯಲ್ಲಿ) ಮಂದರಗಿರಿ ಮೇಲೆ

---

* ನಂ. ೬, ೧ನೆಯ ರಸ್ತೆ, ಎಂ. ಸಿ. ಕಾಲೋನಿ, ತುಮಕೂರು-೨

ನಾಲ್ಕು ಜಿನ ದೇವಾಲಯಗಳು (ಪಾರ್ಶ್ವನಾಥ, ಅಜಿತ ನಾಥ ಮತ್ತು ಬ್ರಹ್ಮದೇವರ ಗುಡಿ ಇವೆ.) ಇವುಗಳನ್ನು ಕ್ರಿ.ಶ. ೧೨ನೆಯ ಶತಮಾನದಲ್ಲಿ ಹೊಯ್ಸಳ ನರಸಿಂಹನ ಸೇನಾಧಿಪತಿ ಈಶ್ವರ ಚಮೂಪತಿ ತನ್ನ ಹೆಂಡತಿ ಮಾಚಿಯಕ್ಕಳ ಪ್ರೇರಣೆಯಿಂದ ನಿರ್ಮಿಸಿದನೆಂದು ತಿಳಿದು ಬರುತ್ತದೆ.

**ನಿಡುಗಲ್ :**

ಪಾವಗಡದ ಬೆಟ್ಟಗುಡ್ಡಗಳ ನಡುವಿರುವ ನಿಡುಗಲ್ ಒಂದು ಜೈನ ಕೇಂದ್ರವಾಗಿತ್ತೆಂಬ ಐತಿಹ್ಯ ವಿದೆ. ನೇಮಿಚಂದ್ರಮುನಿ ಅತ್ತ ಬಂದಾಗ ಇರುಂಗೋಳ ಚೋಳನ ರಾಣಿಯರಾಗಿದ್ದ ಒಬ್ಬಣಬ್ಬೆ-ಚಂದ್ರವ್ವೆ, ಮುನಿಗಳ ಉಪದೇಶದಿಂದ ಪ್ರಭಾವಿತರಾಗಿ ಜೈನಧರ್ಮ ವನ್ನು ಸ್ವೀಕರಿಸಿ ಇಲ್ಲಿ ಪಾಶ್ವನಾಥ ಬಸದಿ ನಿರ್ಮಿಸಲು ಪ್ರೇರೇಪಿಸಿದರು. ಈ ಊರ ಉತ್ತರಕ್ಕೆ ಬಾಹುಬಲಿ ಮೂರ್ತಿ ಮತ್ತು ಎದುರಿಗೆ ಮಾನಸ್ತಂಭ ಹಾಗೂ ಎರಡು ಜೀರ್ಣ ಜಿನ ಮಂದಿರಗಳಿವೆ. ಇದರ ಜೀರ್ಣೋ ದ್ಧಾರವಾಗುವ ಅವಶ್ಯಕತೆಯಿದೆ.

**ಹಚ್ಚಣ :**

ತಿಪಟೂರು ತಾಲ್ಲೂಕಿಗೆ ಸೇರಿದ ಹಚ್ಚಣದಲ್ಲಿ ತ್ರಿಭುವನಮಲ್ಲ ಎರೆಯಂಗ ಹೊಯ್ಸಳದೇವ-ಏಚಲಾ ದೇವಿಯರ ಮಗ ಬಲ್ಲಾಳನ ಮಂತ್ರಿ ಮರಿಯಾನೆ ದಂಡ ನಾಯಕನಿಂದ ನಿರ್ಮಿಸಿದ ಜಿನ ಮಂದಿರವಿದೆ.

**ಇತರ ಸ್ಥಳಗಳಲ್ಲಿರುವ ಜಿನ ಮಂದಿರಗಳು :**

ತುಮಕೂರು ನಗರದಲ್ಲಿ ಇತ್ತೀಚೆಗೆ ಸುಮಾರು ಮೂರು ದಶಕಗಳಿಂದ ಶ್ವೇತಾಂಬರ ಪಂಥದವರು ಅಜಿತ ನಾಥ ಬಸದಿಯನ್ನು ನಾಗರ ಶೈಲಿಯಲ್ಲಿ ಆಧುನೀಕರಿಸಿ ನಿರ್ಮಿಸಿದ್ದಾರೆ ಮತ್ತು ಪಾರ್ಶ್ವನಾಥ ಬಸದಿ ಸಹ ಇಲ್ಲಿದೆ. ಸುಂದರವಾದ ಪಂಚಲೋಹಮೂರ್ತಿಗಳು ಇಲ್ಲಿವೆ. ಹರಿಯಾಳಾದೇವಿ ವ್ರತಸ್ಥಳಾಗಿ ನಿರ್ವಾಣ ಹೊಂದಿದ ಕರಡಾಳಿನಲ್ಲಿ (ತಿಪಟೂರು ತಾಲ್ಲೂಕು)ನಲ್ಲಿ ಒಂದು ಜೈನ ಶಾಸನವಿದೆ. ಇದಲ್ಲದೆ ಬಿದರೆ ಮಲ್ಲಿಸು ಪಾರ್ಶ್ವನಾಥ ಬಸದಿ, ತೋವಿನಕೆರೆಯಲ್ಲಿ ಚಂದ್ರನಾಥ ಬಸದಿ, ಆಕ್ಕಿಂರಾಂಪುರದಲ್ಲಿ ಅನಂತನಾಥಸ್ವಾಮಿ ಬಸದಿ, ಗುಬ್ಬಿಯಲ್ಲಿ ಆದಿನಾಥತೀರ್ಥಸ್ವಾಮಿ,ಮಧುಗಿರಿ ಯಲ್ಲಿ ಮಲ್ಲಿನಾಥ ಮತ್ತು ಇತ್ತೀಚೆಗೆ ಅಮೃತಶಿಲೆಯಲ್ಲಿ ಮಾಡಿರುವ ಬಾಹುಬಲಿಸ್ವಾಮಿ ಮೂರ್ತಿ ಬಸದಿಗಳಿವೆ. ತುಮಕೂರು ನಗರಕ್ಕೆ ಆರು ಕಿ.ಮೀ. ಇರುವ ಕುಪ್ಪಂಗಿ ಯಲ್ಲಿ ಪಾರ್ಶ್ವನಾಥ ಬಸದಿ ೧೧೮೦ರಲ್ಲಿ ಕೇಸರಿಶೆಟ್ಟಿ ಎಂಬುವನು ಕಟ್ಟಿದನೆಂದು ತಿಳಿದುಬರುತ್ತದೆ. ಚಿಕ್ಕ ನಾಯಕನಹಳ್ಳಿ ತಾಲ್ಲೂಕಿನಲ್ಲಿ ಕ್ರಿ. ಶ. ೧೧೬೦ರಲ್ಲಿ ಹೊಯ್ಸಳ ನರಸಿಂಹದೇವನ ಮಹಾ ಸಾಮಂತ ಗೋವಿದೇವನೆಂಬುವನು ಚೆನ್ನಪಾರ್ಶ್ವನಾಥ ಮಂದಿರ ವನ್ನು ನಿರ್ಮಿಸಿ ದತ್ತಿ ಬಿಟ್ಟನೆಂದು ತಿಳಿದಿದೆ. ಮಾಯ ಸಂದ್ರದಲ್ಲಿ ಪಾರ್ಶ್ವನಾಥಸ್ವಾಮಿ, ಕಂದಿಕೆರೆ ಶಾಂತಿನಾಥ ಸ್ವಾಮಿ, ಕೊತ್ತಿಗೆರೆಯಲ್ಲಿ ವಿಷ್ಣುವರ್ಧನನ ಕಾಲದಲ್ಲಿ ನಿರ್ಮಿತವಾದ ಸಂಯುಕ್ತ ಜೈನವಿಗ್ರಹಗಳ ಬಸದಿ, ತೋವಿನಕೆರೆ ಸಮೀಪವಿರುವ ಶೀತಘಲ್‌ನಲ್ಲು ಒಂದು ಬಸದಿ ಇದೆ.

ತುಮಕೂರು ಜಿಲ್ಲೆಯ ಜೈನಮಂದಿರಗಳು ವಾಸ್ತು ಶಿಲ್ಪ ವೈಭವ ವೈಶಿಷ್ಟ್ಯತೆಯನ್ನು ಹೊಂದಿಲ್ಲವಾದರೂ, ಧಾರ್ಮಿಕ ಹಿನ್ನೆಲೆಯಲ್ಲಿ ಮುಖ್ಯವಾಗಿವೆ. ಬಹು- ಮಟ್ಟಿಗೆ ಹೊಯ್ಸಳರ ಆಳ್ವಿಕೆಯಲ್ಲೇ ಜೈನಧರ್ಮ ಪ್ರಬಲವಾಗಿದ್ದು ಹೆಚ್ಚು ಜಿನ ಮಂದಿರಗಳು ಆ ಕಾಲದಲ್ಲಿ ನಿರ್ಮಿತವಾಯಿತೆಂಬುದು ಸ್ಪಷ್ಟ.